ಎಚ್. ಎಸ್. ಕಾಂಬಳೆ

# ಖಾನಾಪುರದಲ್ಲಿಯ ಒಂದು ಅಪರೂಪದ ಪದ್ಮಾವತಿ ಜೈನಯಕ್ಷಿ ಶಿಲ್ಪ

ಖಾನಾಪುರವು ಧಾರವಾಡದಿಂದ ಉತ್ತರಕ್ಕೆ ಸುಮಾರು ೨೪ ಕಿ. ಮೀ. ದೂರದಲ್ಲಿ ಇದೆ. ಈ ಗ್ರಾಮದ ಬಲಗುಡ್ಡದ ಮೇಲೆ ಇತ್ತೀಚೆಗೆ ಒಂದು ದೇವಾಲಯುವನ್ನು ಕಟ್ಟಲಾಗಿದೆ. ಇದನ್ನು ಸ್ಥಳಿಕರು 'ಶಂಕ್ರಿ ದೇವಾಲಯ' ಎಂದು ಕರೆಯುತ್ತಾರೆ.

ಗರ್ಭಗುಡಿಯಲ್ಲಿ ಶಂಕ್ರಿದೇವಿ ಎಂದು ಕರೆಯಲಾಗುವ ಒಂದು ಪ್ರಾಚೀನ ವಿಗ್ರಹವಿದೆ. ಶೈಲಿ ದೃಷ್ಟಿಯಿಂದ ಬಹುಶಃ ಇದು ಕ್ರಿ.ಶ. ೧೧–೧೨ನೇ ಶತಮಾನದ್ದು ಎಂದು ಹೇಳಬಹುದು. ಮೂರ್ತಿಯ ಲಕ್ಷಣಗಳನ್ನು ಪರಿಶೀಲಿಸಿದರೆ 'ಜೈನ ಪದ್ಮಾವತಿ' ಎಂದು ಗುರುತಿಸಬಹುದು. ಈ ಮೂರ್ತಿಯು ತ್ರಿಭಂಗದಲ್ಲಿ ಇದೆ ; ಚತುರ್ಭುಜ ಹೊಂದಿದೆ. ಬಲ ಮತ್ತು ಎಡ ಕೈಗಳಲ್ಲಿ ಕ್ರಮವಾಗಿ 'ಅಂಕುಶ' ಮತ್ತು 'ಪಾಶಾ' ಇವೆ. ಮುಂದಿನ ಎಡಹಸ್ತವು ಮುರಿದು ಹೋಗಿ ಅದರಲ್ಲಿ ಖಡ್ಗವನ್ನು ಜೋಡಿಸಲಾಗಿದೆ.

ಸಾಮಾನ್ಯವಾಗಿ ಈ ಕಾಲದ ಮೂರ್ತಿಶಿಲ್ಪಗಳಲ್ಲಿ ತೋರಿಸಲ್ಪಟ್ಟ ಎಲ್ಲ ಆಭರಣಗಳು ಅಂದರೆ ಕಿರೀಟ, ಚಕ್ರಕುಂಡಲ, ಕಂಠಹಾರ, ಸರ ಮತ್ತು ಕೈಬಳೆ ಮೊದಲಾದವುಗಳಿಂದ ಅಲಂಕರಿಸಲ್ಪಟ್ಟಿದೆ. ಕಿರೀಟ ಮಕುಟದ ಮೇಲೆ 'ಜಿನಬಿಂಬ'ವಿದೆ ಹಾಗೂ ಬಿಚ್ಚಿದ ಹಾವಿನ ಹೆಡೆ ಇದೆ. ಇವೆರಡೂ ಲಕ್ಷಣಗಳು ಜೈನ ಪದ್ಮಾವತಿ ಯಕ್ಷಿಯ ವಿಶಿಷ್ಟ ಲಕ್ಷಣಗಳಾಗಿವೆ. ಆದ್ದರಿಂದ ಈ ಮೂರ್ತಿಯನ್ನು ಪದ್ಮಾವತಿ ಯಕ್ಷಿ ಎಂದು ಗುರುತಿಸಬಹುದು. ಕಟಿವಸ್ತ್ರವನ್ನು ಎರಡು ಬದಿಗಳಲ್ಲಿ ನೆಲ ಮುಟ್ಟುವಂತೆ ಇಳಿಬಿಡಲಾಗಿದೆ. ಇದರ ಪ್ರಭಾವಳಿಯು ಅಂಡಾಕೃತಿಯಲ್ಲಿ ಇದ್ದು ತೀರಾ ಸರಳವಾಗಿದೆ. ತಲೆ ಹಿಂಬದಿಯಲ್ಲಿ ವರ್ತುಳ ಪ್ರಭಾಮಂಡಳವಿದೆ. ಮೈಮಾಟವು ನೀಳವಾಗಿದೆ. ಇವೆಲ್ಲವು ತುಲನಾತ್ಮಕ ವಿಶಿಷ್ಟ ಲಕ್ಷಣಗಳು. ಸಾಮಾನ್ಯವಾಗಿ ೧೧–೧೨ನೇ ಶತಮಾನದ ಜೈನಯಕ್ಷಿ ಮೂರ್ತಿಯನ್ನು ಕುಳಿತ ಭಂಗಿಯಲ್ಲಿ ತೋರಿಸಲಾಗುತ್ತದೆ. ಇಲ್ಲಿ ನಿಂತ ಭಂಗಿಯಲ್ಲಿ ತೋರಿಸುವುದು ಒಂದು ಅಪರೂಪದ ಮಾದರಿ. ಈ ತರದ ಮೂರ್ತಿ ಐಹೊಳೆಯಲ್ಲಿ ಒಂದಿದೆ. ಇದರಲ್ಲಿ ಒಂದು ವಿಶಿಷ್ಟ ಲಕ್ಷಣವಿದೆ ; ಇದು ಅಷ್ಟ-ಭುಜ ಉಳ್ಳದ್ದು; ಶೈಲಿದೃಷ್ಟಿಯಿಂದ ಇದು ೧೨ನೇ ಶತಮಾನದ್ದು.

ಆದ್ದರಿಂದ ಖಾನಾಪುರದ ಗುಡ್ಡದ ಬದಿಯಲ್ಲಿ ಆಗಾಗ ಅಗೆದಾಗ ಜೈನ ಅವಶೇಷಗಳು ದೊರೆಯುತ್ತವೆ, ಮತ್ತು ಅರ್ಧ ಕಿ.ಮೀ. ದೂರದಲ್ಲಿ ತಡಕೊಡ ಗ್ರಾಮದೊಳಗೆ ಒಂದು ಜೈನ ಬಸದಿ ಇದೆ. ಇವುಗಳನ್ನು ಪರಿಶೀಲಿಸಿದಾಗ ಇಲ್ಲಿ ಒಂದು ಪಾರ್ಶ್ವನಾಥ ದೇವಾಲಯ ಇದ್ದಿರಬಹುದು ಎಂದು ಹೇಳಬಹುದು. ಇವುಗಳ ಹೆಚ್ಚಿನ ಅಧ್ಯಯನ ಕೈಗೊಳ್ಳಲಾಗಿದೆ.